ನಡಾಕಕೋಂಡಿ
STD
22/9/2020



# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 18 (05)
2. ಸದಸ್ಯರ ಹೆಸರು : ಶ್ರೀ ಬಸವರಾಜ ಪಾಟೀಲ ಇಟಗಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 22-09-2020
4. ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಪಟ್ಟಣಕ್ಕೆ 24X7 ಕುಡಿಯುವ ನೀರಿನ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗಿದೆ? | ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿಯಲ್ಲಿ (N.K.U.S.I.P) ರಾಯಚೂರು ಪಟ್ಟಣಕ್ಕೆ 24X7 ಕುಡಿಯುವ ನೀರಿನ ಕಾಮಗಾರಿಯನ್ನು ದಿನಾಂಕ:28-02-2015 ರಂದು ಪ್ರಾರಂಭಿಸಲಾಗಿದೆ.<br><br>ಸದರಿ ಯೋಜನೆಯನ್ನು ದಿನಾಂಕ:28-02-2015 ರಂದು ರೂ.117.96 ಕೋಟಿಗಳ ವೆಚ್ಚದಲ್ಲಿ (ನಿರ್ಮಾಣ ವೆಚ್ಚ ರೂ.79.93 ಕೋಟಿ, ಕಾರ್ಯಾಚರಣೆ ಮತ್ತು ನಿರ್ವಹಣೆ ವೆಚ್ಚ ರೂ.38.02 ಕೋಟಿಗಳು) ಗುತ್ತಿಗೆ ನೀಡಿದ್ದು, ಕಾಮಗಾರಿಯ ಪ್ರಗತಿಯು ಶೇ.73.35 ಆಗಿರುತ್ತದೆ.<br><br>ಸದರಿ ಯೋಜನೆಯ ಪರಿಷ್ಕೃತ ಗುತ್ತಿಗೆ ಮೊತ್ತ ರೂ.95.91 ಕೋಟಿಗಳಾಗಿರುತ್ತದೆ. |
| ಆ) | ಕುಡಿಯುವ ನೀರಿನ ಕಾಮಗಾರಿ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮವೇನು ಮತ್ತು ಕಾಮಗಾರಿ ಪೂರ್ತಿಗೊಳ್ಳದಿರಲು ಕಾರಣವೇನು? | ಕುಡಿಯುವ ನೀರಿನ ಕಾಮಗಾರಿ ಸ್ಥಗಿತಗೊಂಡಿರುವುದಿಲ್ಲ. ಕಾಮಗಾರಿಯ ಪ್ರಗತಿಯು ಕುಂಠಿತವಾಗಿರುತ್ತದೆ.<br><br>ಈ ಯೋಜನೆಯ ಕಾಮಗಾರಿ ಪೂರ್ಣಗೊಳಿಸಲು ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ:<br><br>1. ಬಾಕಿ ಕಾಮಗಾರಿಯನ್ನು ವಿಸ್ತರಣಾ ಅವಧಿಯಲ್ಲಿ ಪೂರ್ಣಗೊಳಿಸಲು ನಿಯಮಿತವಾಗಿ ಪ್ರಗತಿ ಪರಿಶೀಲನೆ ನಡೆಸಲಾಗುತ್ತಿದೆ. ಕಾಮಗಾರಿಗಳ ಪ್ರಗತಿಯ ವಿವರವನ್ನು ದಿನವಹಿ ಪಡೆದು ಯೋಜನೆಯ ಪ್ರಗತಿಯಲ್ಲಿ ಕುಂಠಿತವಾದ ಪಕ್ಷದಲ್ಲಿ ಗುತ್ತಿಗೆದಾರರೊಂದಿಗೆ ಸಭೆ ನಡೆಸಿ ಪ್ರಗತಿ ಸಾಧಿಸಲು ಆಗಿಂದಾಗ್ಯೆ ಕ್ರಮ ಕೈಗೊಳ್ಳಲಾಗುತ್ತಿದೆ. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| | | 2. ವೀಡಿಯೋ ಕಾನ್ಫರೆನ್ಸ್ / ಸ್ಥಳ ಪರಿಶೀಲನೆ ಮೂಲಕ ಆಗಿಂದಾಗ್ಯೆ ಪ್ರಗತಿಯ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತಿದೆ.<br><br>3. ಗುತ್ತಿಗೆದಾರರು ಈ ಯೋಜನೆಯ ಕಾಮಗಾರಿಗಳನ್ನು ಪೂರ್ಣಗೊಳಿಸಲು ಅವಶ್ಯವಾದ ಸಂಪನ್ಮೂಲಗಳನ್ನು ಸಜ್ಜುಗೊಳಿಸುವಲ್ಲಿ ಅಗತ್ಯ ಸೂಚನೆ ನೀಡಲಾಗುತ್ತಿದೆ.<br><br>4. ಕಾಮಗಾರಿ ವಿಳಂಬವಾಗಿರುವುದಕ್ಕೆ ಕರಾರಿನ್ವಯ, ಸೂಕ್ತ ದಂಡ ವಿಧಿಸಲಾಗುತ್ತಿದೆ.<br><br>5. ಕಾಮಗಾರಿ ವೇಗವಾಗಿ ಪೂರ್ಣಗೊಳಿಸಲು ಗುತ್ತಿಗೆದಾರರಿಗೆ ಎಚ್ಚರಿಕೆ ನೋಟಿಸ್ ಸಹ ಜಾರಿಗೊಳಿಸಲಾಗಿದೆ.<br><br>6. ಗುತ್ತಿಗೆದಾರರು ದೆಹಲಿ ಮೂಲದವರಾದ್ದರಿಂದ Cash flow ಅನುಕೂಲಕ್ಕೋಸ್ಕರ ಸ್ಥಳೀಯ ಬ್ಯಾಂಕ್‌ನಲ್ಲಿ ಖಾತೆ ತೆರೆದು ಶೀಘ್ರವಾಗಿ ಹಣ ಬಿಡುಗಡೆಗೆ ವ್ಯವಸ್ಥೆ ಮಾಡಲಾಗಿದೆ.<br><br>7. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜರುಗಿದ ರಾಯಚೂರು ಟಾಸ್ಕ್ ಫೋರ್ಸ್ ಸಭೆಯಲ್ಲಿ ಸಾಕಷ್ಟು ಬಾರಿ ಎಚ್ಚರಿಕೆ ನೀಡಲಾಗಿದೆ.<br><br>8. ನಗರಾಭಿವೃದ್ಧಿ ಸಚಿವರು ರಾಯಚೂರು ನಗರಕ್ಕೆ ಪ್ರವಾಸ ಕೈಗೊಂಡು, ಕಾಮಗಾರಿ ಪರಿಶೀಲನೆ ಮಾಡಿ ಜಿಲ್ಲಾಧಿಕಾರಿಗಳ ಸಹಯೋಗದೊಂದಿಗೆ ಸಭೆ ಕರೆದು ಕಾಮಗಾರಿಯನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸುವಂತೆ ಕಟ್ಟು ನಿಟ್ಟಾಗಿ ಆದೇಶಿಸಿದ್ದಾರೆ.<br><br>9. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ನಗರಾಭಿವೃದ್ಧಿ ಇಲಾಖೆ ರವರ ನೇತೃತ್ವದಲ್ಲಿ ಸಭೆ ನಡೆಸಿ, ಕಾಮಗಾರಿಯನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸುವಂತೆ ಆದೇಶಿಸಿರುತ್ತಾರೆ. ಅದರಂತೆ ಪ್ರಗತಿಯನ್ನು ಆಗಿಂದಾಗ್ಗೆ ಪರಿಶೀಲಿಸಲಾಗುತ್ತಿದೆ.<br><br>ಕಾಮಗಾರಿಯನ್ನು ಗುತ್ತಿಗೆ ಕರಾರಿನ ಪ್ರಕಾರ ದಿನಾಂಕ:27-08-2017 ರೊಳಗೆ ಪೂರ್ಣಗೊಳಿಸಲು ಗಡುವು ನಿಗಧಿಪಡಿಸಲಾಗಿತ್ತು.<br><br>ಈ ಕೆಳಕಂಡ ಮುಖ್ಯ ಕಾರಣಗಳಿಂದ ಕಾಮಗಾರಿಯು ವಿಳಂಬವಾಗಿರುತ್ತದೆ: |

| ಸಂ | ಪ್ರಶ್ನೆ | ಉತ್ತರ |
|---|---|---|
| | | 1. ಸಮಾಲೋಚಕರಾದ ಮೆ|| SNC LAVLIN ರವರು ದಿ:03-05-2017 ರಲ್ಲಿ ಅಂತಿಮಗೊಳಿಸಿರುತ್ತಾರೆ. ಇದರಿಂದ, ವಿಳಂಬಗೊಂಡಿರುತ್ತದೆ.<br>2. ಗುತ್ತಿಗೆದಾರರು ಯೋಜನೆಗೆ ಅವಶ್ಯವಾದ ಸಂಪನ್ಮೂಲಗಳನ್ನು ಸಜ್ಜುಗೊಳಿಸುವಲ್ಲಿ ವಿಫಲರಾಗಿದ್ದರಿಂದ ಅನುಷ್ಠಾನದಲ್ಲಿ ವಿಳಂಭವಾಗಿದೆ.<br>3. ಅಮೃತ್ ಯೋಜನೆಯ ಕೆಲಸಗಳ ಜೊತೆಗೆ ಪೂರಕವಾಗುವಂತೆ ಮರು ವಿನ್ಯಾಸ ಮಾಡಲಾಯಿತು. ಇದರಿಂದ, ವಿಳಂಭವಾಗಿರುತ್ತದೆ.<br>4. ಮಾರ್ಚ್ 2020 ರಿಂದ ಕೋವಿಡ್-19 ಪಿಡುಗು ಬಂದ ಕಾರಣ ಲಾಕ್ ಡೌನ್ ಘೋಷಣೆಯಾದ ನಿಮಿತ್ತ ಕೂಲಿ ಕಾರ್ಮಿಕರ ಅಭಾವದಿಂದ ಕಾಮಗಾರಿ ಕುಂಠಿತಗೊಂಡಿರುತ್ತದೆ.<br>ಮೇಲ್ಕಂಡ ಕಾರಣಗಳಿಂದ ಕಾಮಗಾರಿಯನ್ನು ಪೂರ್ಣಗೊಳಿಸಲು ಗುತ್ತಿಗೆ ಅವಧಿಯನ್ನು ದಿನಾಂಕ:28-02-2021 ರವರೆಗೆ ವಿಸ್ತರಿಸಲಾಗಿದೆ. |
| ಇ) | ಅಮೃತ್ ಯೋಜನೆಯಲ್ಲಿ ಎಷ್ಟು ಕಾಮಗಾರಿಗಳು ಮಂಜೂರಾಗಿವೆ? | ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ರಾಯಚೂರು ನಗರದಲ್ಲಿ ರೂ.176.42 ಕೋಟಿ ಮೊತ್ತದ 10 ಕಾಮಗಾರಿಗಳು ಮಂಜೂರಾಗಿವೆ. |
| ಈ) | ಅಮೃತ್ ಯೋಜನೆ ಯಾವ ಹಂತದಲ್ಲಿದೆ ? (ವಿವರ ನೀಡುವುದು) | 1. ರೂ.3.17 ಕೋಟಿ ಮೊತ್ತದ 07 ಉದ್ಯಾನವನ ಮತ್ತು ಹಸಿರು ಜಾಗ ಅಭಿವೃದ್ಧಿ ಕಾಮಗಾರಿಗಳಲ್ಲಿ 6 ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ. 1 ಕಾಮಗಾರಿ ಪ್ರಗತಿಯಲ್ಲಿದೆ. ರೂ.2.75 ಕೋಟಿಗಳನ್ನು ನಗರಸಭೆ ವತಿಯಿಂದ ವೆಚ್ಚ ಮಾಡಲಾಗಿದೆ.<br>2. ರೂ.54.26 ಕೋಟಿ ಮೊತ್ತದ ನೀರು ಸರಬರಾಜು ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಅನುಷ್ಠಾನಿಸುತ್ತಿದ್ದು, ಕಾಮಗಾರಿ ಪ್ರಗತಿಯಲ್ಲಿದೆ ಶೇಕಡಾ 60 ರಷ್ಟು ಭೌತಿಕ ಪ್ರಗತಿ ಸಾಧಿಸಿ ಅಗಸ್ಟ 2020 ಅಂತ್ಯದವರೆಗೆ ರೂ.32.29 ಕೋಟಿಗಳನ್ನು ಮಂಡಳಿ ವತಿಯಿಂದ ವೆಚ್ಚ ಮಾಡಲಾಗಿದೆ. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| | | 3.ರೂ.117.71 ಕೋಟಿ ಮೊತ್ತದ 2 ಒಳಚರಂಡಿ ಕಾಮಗಾರಿಗಳನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿದ್ದು, ಸದರಿ ಕಾಮಗಾರಿಗಳಲ್ಲಿ ಆಗಸ್ಟ 2020ರ ಒಳಗೆ ಶೇಕಡ 72% ರಷ್ಟು ಭೌತಿಕವಾಗಿ ಪ್ರಗತಿ ಸಾಧಿಸಿ, ರೂ.72.32ಕೋಟಿ ವೆಚ್ಚ ಮಾಡಲಾಗಿದೆ.<br>ಮೇಲಿನ ಕಾಮಗಾರಿಗೆ ಯೋಜನೆಯಡಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಅನುದಾನ ರೂ.91.12 ಕೋಟಿ ಬಿಡುಗಡೆಗೊಳಿಸಿದ್ದು, ನಗರ ಸ್ಥಳೀಯ ಸಂಸ್ಥೆಯ ವಂತಿಕೆಯಾಗಿ ರಾಯಚೂರು ನಗರಸಭೆಯು ರೂ.21.01 ಕೋಟಿ ಪಾವತಿಸಿದೆ. ಆಗಸ್ಟ 2020ರ ಅಂತ್ಯದವರೆಗೆ ಒಟ್ಟು ವೆಚ್ಚ ರೂ.107.36 ಕೋಟಿಗಳಾಗಿರುತ್ತವೆ. |

ನಅಇ 191 ಪಿ.ಆರ್.ಜೆ 2020

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು.